

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 424 (485) |
| ಮಾನ್ಯ ಸದಸ್ಯರ ಹೆಸರು | ಡಾ॥ ವೈ. ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | **16/12/2021** |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರ್ಮಿಕ ಇಲಾಖೆಯಲ್ಲಿರುವ ಕಾರ್ಮಿಕ ಕಲ್ಯಾಣ ಮಂಡಳಿ ಅಸ್ತಿತ್ವದಲ್ಲಿದೆಯೇ; ಇದ್ದಲ್ಲಿ, ಅದರ ಧ್ಯೇಯೋದ್ದೇಶಗಳೇನು; | ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಅಧಿನಿಯಮ, 1965 ರನ್ವಯ ದಿನಾಂಕ 27–01–1969ರಂದು ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯನ್ನು ರಚಿಸಲಾಗಿದ್ದು ಅಸ್ತಿತ್ವದಲ್ಲಿರುತ್ತದೆ. 50 ಕ್ಕಿಂತ ಹೆಚ್ಚು ಕಾರ್ಮಿಕರು ಕಾರ್ಯನಿರ್ವಹಿಸುತ್ತಿರುವ ಕಾರ್ಖಾನೆಗಳು, ಪ್ಲಾಂಟೇಷನ್‌ಗಳು, ಮೋಟಾರು ಸಂಸ್ಥೆಗಳು ಹಾಗೂ ಅಂಗಡಿ ಮತ್ತು ವಾಣಿಜ್ಯ ಸಂಸ್ಥೆಗಳಲ್ಲಿ ಕೆಲಸ ಮಾಡುವ ಪ್ರತಿ ಕಾರ್ಮಿಕರಿಂದ ರೂ. 20/– ಉದ್ಯೋಗದಾತರಿಂದ ರೂ. 40/– ಹಾಗೂ ಸರ್ಕಾರದ ವತಿಯಿಂದ ರೂ. 20/– ವಂತಿಗೆ ಪಾವತಿಸುತ್ತವೆ ಹಾಗೂ ಸರ್ಕಾರವು ಪ್ರತಿ ಕಾರ್ಮಿಕರಿಗೆ ರೂ. 20/–ರಂತೆ ಅಂಶಧನವನ್ನು (Matching Contribution) ಕಲ್ಯಾಣ ನಿಧಿಗೆ ಪಾವತಿ ಮಾಡಬೇಕಾಗಿರುತ್ತದೆ. ನಿಯಮಾನುಸಾರ ವಂತಿಗೆಯನ್ನು ಪಾವತಿಸುವ ಸಂಘಟಿತ ಕಾರ್ಮಿಕರಿಗೆ ಮಂಡಳಿ ವತಿಯಿಂದ ಕಲ್ಯಾಣ ಯೋಜನೆಯಡಿಯಲ್ಲಿ ಸೌಲಭ್ಯಗಳನ್ನು ನೀಡಲಾಗುವುದು.<br>ಮಂಡಳಿಯಿಂದ ಅನುಷ್ಠಾನಗೊಳಿಸುತ್ತಿರುವ ಕಲ್ಯಾಣ ಯೋಜನೆಗಳ ವಿವರಗಳನ್ನು **ಅನುಬಂಧ–1** ರಲ್ಲಿ ಲಗತ್ತಿಸಿದೆ. |
| ಆ) | ಕಳೆದ 5–ವರ್ಷಗಳಲ್ಲಿ ಮೇಲ್ಕಂಡ ಉದ್ದೇಶಗಳಿಗೆ ಮೀಸಲಿಟ್ಟಿರುವ ಅನುದಾನ ಎಷ್ಟು; | ಕಳೆದ 5 ವರ್ಷಗಳಲ್ಲಿ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯಿಂದ ಕಲ್ಯಾಣ ಯೋಜನೆಗಳಿಗೆ ಮೀಸಲಿಟ್ಟಿರುವ ಅನುದಾನದ (ಅಂಶಧನ) Matching Contribution ವಿವರಗಳನ್ನು **ಅನುಬಂಧ–2** ರಲ್ಲಿ ಲಗತ್ತಿಸಿದೆ. |
| ಇ) | ಈ 5–ವರ್ಷಗಳಲ್ಲಿ ಮಂಡಳಿಯಲ್ಲಿ ಮೇಲ್ಕಂಡ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿರುವ ಅನುದಾನ ಮತ್ತು ಖರ್ಚು–ವೆಚ್ಚಗಳೆಷ್ಟು? (ವಿವರಗಳನ್ನು ನೀಡುವುದು) | ಕಳೆದ 5 ವರ್ಷಗಳಲ್ಲಿ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯಿಂದ ಕಲ್ಯಾಣ ಯೋಜನೆಗಳಿಗೆ ಬಿಡುಗಡೆ ಮಾಡಲಾದ ಅನುದಾನ ಮತ್ತು ಭರಿಸಲಾದ ವೆಚ್ಚದ ವಿವರಗಳನ್ನು **ಅನುಬಂಧ–3** ರಲ್ಲಿ ಲಗತ್ತಿಸಿದೆ. |

**ಕಾಇ 532 ಎಲ್‌ಇಟಿ 2021**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

## ಅನುಬಂಧ-1

**ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಡಾ|| ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 485(424)**

**:ಕಾರ್ಮಿಕ ಕಲ್ಯಾಣ ಯೋಜನೆಗಳ ವಿವರ:**

ಕರ್ನಾಟಕ ರಾಜ್ಯದಲ್ಲಿ ಕಾರ್ಮಿಕರ ಕಲ್ಯಾಣವನ್ನು ಸಂವರ್ಧನಗೊಳಿಸುವುದಕ್ಕೆ ಹಣಕಾಸು ನೆರವು ಒದಗಿಸಲು ಮತ್ತು ಚಟುವಟಿಕೆಗಳನ್ನು ನಡೆಸುವುದಕ್ಕಾಗಿ ಒಂದು ನಿಧಿಯನ್ನು, ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಅಧಿನಿಯಮ, 1965ರ ಅಡಿಯಲ್ಲಿ ಸ್ಥಾಪಿಸಲಾಗಿದೆ. ಮಂಡಳಿಗೆ ವಂತಿಗೆ ಪಾವತಿಸುವ ವಿವಿಧ ಕ್ಷೇತ್ರಗಳಾದ ಕಾರ್ಖಾನೆಗಳು/ಸಂಸ್ಥೆಗಳು/ಪ್ಲಾಂಟೇಶನ್/ಸಾರಿಗೆ ಸಂಸ್ಥೆಗಳಲ್ಲಿ ದುಡಿಯುತ್ತಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರ ಕ್ಷೇಮಾಭಿವೃದ್ಧಿಗಾಗಿ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ ಈ ಕೆಳಗಿನ ಯೋಜನೆಗಳು ಜಾರಿಯಲ್ಲಿರುತ್ತದೆ.

ಸೂಚನೆ :

1. ಯೋಜನೆಯ ಸೌಲಭ್ಯ ಪಡೆಯಲು ಪ್ರತಿ ವರ್ಷ ಜನವರಿ 15 ರೊಳಗೆ ಕಾರ್ಮಿಕರು, ಮಾಲೀಕರು ರೂ. 20 : 40 ಅನುಪಾತದಲ್ಲಿ ಒಬ್ಬ ಕಾರ್ಮಿಕನಿಗೆ ಒಟ್ಟು ರೂ. 60/- ಗಳಂತೆ ವಂತಿಕೆಯನ್ನು ಕಾರ್ಮಿಕ ಕಲ್ಯಾಣ ನಿಧಿಗೆ ಪಾವತಿಸತಕ್ಕದ್ದು.
2. ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ ಪಡೆಯಲು ವಿದ್ಯಾರ್ಥಿಗಳು, ಶೈಕ್ಷಣಿಕ ಸಂಸ್ಥೆಗಳು, ಕಾರ್ಖಾನೆಗಳು/ಸಂಸ್ಥೆಗಳು www.klwb.karnataka.gov.in ಇಲ್ಲಿ ನೊಂದಾಯಿಸಿ ಆನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಬೇಕಾಗಿರುತ್ತದೆ.
3. ವಂತಿಕೆ ಪಾವತಿ ಮಾಡುವ ಸಂಸ್ಥೆಗಳು ಹಾಗೂ ಕಾರ್ಖಾನೆಗಳು www.klwb.karnataka.gov.in ಇಲ್ಲಿ ತಮ್ಮ ಸಂಸ್ಥೆಗಳನ್ನು ನೊಂದಾಯಿಸಿ ವಂತಿಕೆ ಪಾವತಿ ಮಾಡಬೇಕಾಗಿರುತ್ತದೆ.

**ಈ ಕೆಳಗಿನ ಯೋಜನೆಗಳಿಗೆ ಮಾಸಿಕ ವೇತನ ರೂ. 21,000/- ಗಿಂತ ಮೀರಿರಬಾರದು. ವಯೋಮಿತಿ 18- 60**

1. **ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ: ಪ್ರೌಡ ಶಾಲೆ,** (8 ರಿಂದ 10ನೇ ತರಗತಿವರೆಗೆ) ರೂ.3,000/ ಪಿಯುಸಿ/ಡಿಪ್ಲೊಮಾ/ಐಟಿಐ/ಟಿಸಿಹೆಚ್ ಶಿಕ್ಷಣಕ್ಕಾಗಿ ರೂ.4,000/-ಪದವಿ ಶಿಕ್ಷಣಕ್ಕಾಗಿ ರೂ.5,000/ ಸ್ನಾತಕೋತ್ತರ ಶಿಕ್ಷಣಕ್ಕಾಗಿ ರೂ.6,000/-ಇಂಜಿನೀಯರಿಂಗ್/ವೈದ್ಯಕೀಯ ಶಿಕ್ಷಣಕ್ಕಾಗಿ ರೂ.10,000/-ಗಳ ಪ್ರೋತ್ಸಾಹ ಧನ ನೀಡಲಾಗುವುದು.**(ಅರ್ಜಿ ಸಲ್ಲಿಸಲು ಸಾಮಾನ್ಯ ವರ್ಗದ ವಿದ್ಯಾರ್ಥಿಗಳು ಶೇ.50 ಹಾಗೂ ಪ.ಜಾ / ಪ.ಪಂಗಡದ ವಿದ್ಯಾರ್ಥಿಗಳು ಶೇ. 45 ರಷ್ಟು ಅಂಕ ಪಡೆದು ತೇರ್ಗಡೆಯಾಗಿರಬೇಕು. ಒಂದು ಕುಟುಂಬದಲ್ಲಿ ಒಬ್ಬ ವಿದ್ಯಾರ್ಥಿಗೆ ಮಾತ್ರ ಈ ಸೌಲಭ್ಯ ನೀಡಲಾಗುವುದು)**

2. **ಕಾರ್ಮಿಕರಿಗೆ ವೈದ್ಯಕೀಯ ನೆರವು :** ಹೃದಯ ಶಸ್ತ್ರಚಿಕಿತ್ಸೆ, ಕಿಡ್ನಿ ಟ್ರಾನ್ಸ್‌ಪ್ಲಾಂಟೇಷನ್, ಕ್ಯಾನ್ಸರ್, ಆಂಜಿಯೋಪ್ಲಾಸ್ಟಿ, ಕಣ್ಣು, ಅರ್ಥೋಪೆಡಿಕ್, ಗರ್ಭಕೋಶದ ಶಸ್ತ್ರ ಚಿಕಿತ್ಸೆ, ಗಾಲ್ ಬ್ಲಾಡರ್ ತೊಂದರೆ, ಮೆದುಳಿನ ರಕ್ತಸ್ರಾವ ಚಿಕಿತ್ಸೆಗೆ ಕನಿಷ್ಠ **ರೂ. 1,000/-**ದಿಂದ ಗರಿಷ್ಠ **ರೂ.25,000/-**ವರೆಗೆ ಮತ್ತು ಆರೋಗ್ಯ ತಪಾಸಣೆಗೆ **ರೂ. 500/-**ರಿಂದ **ರೂ, 1000/-**ವರೆಗೆ ಧನ ಸಹಾಯ ನೀಡಲಾಗುವುದು.

3. **ಕಾರ್ಮಿಕರಿಗೆ ಅಪಘಾತ ಧನ ಸಹಾಯ :** ಕಾರ್ಮಿಕರಿಗೆ ಕೆಲಸದ ವೇಳೆಯಲ್ಲಿ ಅಪಘಾತವಾದಲ್ಲಿ ಕನಿಷ್ಠ **ರೂ. 1,000/-** ಗರಿಷ್ಠ **ರೂ. 10,000/-** ವರೆಗೆ ಧನ ಸಹಾಯ ನೀಡಲಾಗುವುದು. ಸೌಲಭ್ಯ ಪಡೆಯುವ ಕಾರ್ಮಿಕರು ಅಪಘಾತವಾದ ಮೂರು ತಿಂಗಳೊಳಗೆ ಅರ್ಜಿ ಸಲ್ಲಿಸತಕ್ಕದ್ದು.

4. **ಹೆರಿಗೆ ಭತ್ಯೆ ಸೌಲಭ್ಯ :** ಮಹಿಳಾ ಕಾರ್ಮಿಕರಿಗೆ ಮೊದಲ 2 ಮಕ್ಕಳಿಗೆ ಮಾತ್ರ ಹೆರಿಗೆ ಭತ್ಯೆ ಸೌಲಭ್ಯವನ್ನು ತಲಾ **ರೂ. 10,000/-** ಧನ ಸಹಾಯ ನೀಡಲಾಗುವುದು. ಮಗು ಜನಿಸಿದ 6 ತಿಂಗಳೊಳಗೆ ಅರ್ಜಿ ಸಲ್ಲಿಸತಕ್ಕದ್ದು.

**<u>ಈ ಕೆಳಗಿನ ಯೋಜನೆಗಳಿಗೆ ಮಾಸಿಕ ಸಂಬಳದ ಮಿತಿಯಿರುವುದಿಲ್ಲ.</u> ವಯೋಮಿತಿ 18– 60**

5. **ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ** :ಈ ಯೋಜನೆಯ ಸೌಲಭ್ಯ ಪಡೆಯಲು ಮೃತರ ಕುಟುಂಬದ ಅವಲಂಬಿತರು ಕಾರ್ಮಿಕ ಮೃತಪಟ್ಟ ಆರು ತಿಂಗಳೊಳಗೆ ನಿಗಧಿತ ಅರ್ಜಿ ನಮೂನೆಯಲ್ಲಿ ಸೂಕ್ತ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸಿದಲ್ಲಿ, **ರೂ. 10,000/–** ಧನ ಸಹಾಯ ನೀಡಲಾಗುವುದು.

6. **ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರ ಹಮ್ಮಿಕೊಳ್ಳುವ ಟ್ರೇಡ್ ಯೂನಿಯನ್/ಸಂಸ್ಥೆಗಳಿಗೆ ಧನಸಹಾಯ** : ನೋಂದಾಯಿತ ಕಾರ್ಮಿಕ ಸಂಘಟನೆಗಳು/ ಸರ್ಕಾರೇತರ ಸಂಸ್ಥೆಗಳು ಕಲ್ಯಾಣ ಆಯುಕ್ತರ ಪೂರ್ವಾನುಮತಿಯೊಂದಿಗೆ ಹಮ್ಮಿಕ್ಕೊಳ್ಳುವ ವಾರ್ಷಿಕ ಆರೋಗ್ಯ ತಪಾಸಣೆ ಶಿಬಿರಕ್ಕೆ **ರೂ. 1,00,000/–** ಧನ ಸಹಾಯ ನೀಡಲಾಗುವುದು.

7. **ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಳ್ಳುವ ನೊಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ** : ನೋಂದಾಯಿತ ಕಾರ್ಮಿಕ ಸಂಘಟನೆಗಳು ಕಲ್ಯಾಣ ಆಯುಕ್ತರ ಪೂರ್ವಾನುಮತಿಯೊಂದಿಗೆ ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಂಡಲ್ಲಿ **ರೂ. 1,00,000/–** ಧನ ಸಹಾಯ ನೀಡಲಾಗುವುದು.

**<u>ಧನ ಸಹಾಯವನ್ನು ಫಲಾನುಭವಿಗಳ ಉಳಿತಾಯ ಖಾತೆಗೆ ನೇರವಾಗಿ ಆರ್.ಟಿ.ಜಿ.ಎಸ್ ಮೂಲಕ ಜಮಾ ಮಾಡಲಾಗುವುದು.</u>**

## ಅನುಬಂಧ-2

**ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಡಾ|| ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 485(424) ಕ್ಕೆ**

ಕಳೆದ 5 ವರ್ಷಗಳಲ್ಲಿ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯಿಂದ ಕಲ್ಯಾಣ ಯೋಜನೆಗಳಿಗೆ ಮೀಸಲಿಟ್ಟಿರುವ ಅನುದಾನದ (ಅಂಶಧನ) Matching Contribution ವಿವರಗಳು

| ವರ್ಷ | ಮಂಡಳಿಯಿಂದ ಮೀಸಲಿಟ್ಟಿರುವ ಅನುದಾನ (ರೂ. ಲಕ್ಷಗಳಲ್ಲಿ) | ಸರ್ಕಾರದರಿಂದ ಬಿಡುಗಡೆಯಾದ ಅಂಶದಾನ (ರೂ. ಲಕ್ಷಗಳಲ್ಲಿ) | ಒಟ್ಟು ಮೀಸಲಿರಿಸಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|---|
| 2016–17 | 30–00 | 240–00 | 270–00 |
| 2017–18 | 128–00 | 600–00 | 728–00 |
| 2018–19 | 374–00 | 500–00 | 874–00 |
| 2019–20 | 350–00 | 718–00 | 1068–00 |
| 2020–21 | 28–00 | 600–00 | 628–00 |

# ಅನುಬಂಧ–3

## ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಡಾ|| ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 485(424)

ಕಳೆದ 5 ವರ್ಷಗಳಲ್ಲಿ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯಿಂದ ಕಲ್ಯಾಣ ಯೋಜನೆಗಳಿಗೆ ಬಿಡುಗಡೆ ಮಾಡಲಾದ ಅನುದಾನ ಮತ್ತು ಭರಿಸಲಾದ ವೆಚ್ಚದ ವಿವರಗಳು

| ವರ್ಷ | ಬಿಡುಗಡೆಯಾದ ಅನುದಾನ (ರೂ. ಲಕ್ಷಗಳಲ್ಲಿ) | ಭರಿಸಲಾದ ವೆಚ್ಚ (ರೂ. ಲಕ್ಷಗಳಲ್ಲಿ) |
|---|---|---|
| 2016–17 | 240–00 | 270–00 |
| 2017–18 | 600–00 | 728–00 |
| 2018–19 | 500–00 | 874–00 |
| 2019–20 | 718–00 | 1068–00 |
| 2020–21 | 600–00 | 628–00 |

- ಕಾರ್ಮಿಕ ಕಲ್ಯಾಣ ಯೋಜನೆಗಳಿಗೆ ಸರ್ಕಾರದಿಂದ ಬಿಡುಗಡೆಯಾದ ಅನುದಾನ (ಅಂಶಧನ) ಕ್ಕಿಂತ ಹೆಚ್ಚುವರಿ ವೆಚ್ಚವನ್ನು ಮಂಡಳಿ ನಿಧಿಯಿಂದ ಭರಿಸಲಾಗಿದೆ.